# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 687(800)

ಸದಸ್ಯರ ಹೆಸರು : ಶ್ರೀ. ಮುನಿರಾಜು ಗೌಡ ಪಿ.ಎಂ (ವಿಧಾನಸಭೆ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 20-12-2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೆಲವು ಖಾಸಗಿ ಸಂಸ್ಥೆಗಳು ರಾಜ್ಯ ಸರ್ಕಾರವು ಜಾರಿಗೆ ತಂದಿರುವ ಕನ್ನಡ ಭಾಷಾ ಕಲಿಕಾ ಅಧಿನಿಯಮ 2015ರ ಅನ್ವಯ ಪ್ರಾಥಮಿಕ ಹಂತದಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಕಲಿಸದೆ ಉಲ್ಲಂಘನೆ ಮಾಡುತ್ತಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಹಾಗಿದ್ದಲ್ಲಿ ಒಟ್ಟು ಎಷ್ಟು ಖಾಸಗಿ ಶಿಕ್ಷಣ ಸಂಸ್ಥೆಗಳು ಸದರಿ ಅಧಿನಿಯಮ ಉಲ್ಲಂಘಿಸಿರುವ ಪ್ರಕರಣಗಳು ಇರುತ್ತದೆ; (ಜಿಲ್ಲಾವಾರು ಶಿಕ್ಷಣ ಹೆಸರಿನೊಂದಿಗೆ ವಿವರ ನೀಡುವುದು) | ಧಾರವಾಡ ಮತ್ತು ಕಲಬುರಗಿ ವಿಭಾಗದಲ್ಲಿ ಇಂತಹ ಪ್ರಕರಣಗಳು ಇರುವುದಿಲ್ಲ. ಬೆಂಗಳೂರು ಮತ್ತು ಮೈಸೂರು ವಿಭಾಗದಲ್ಲಿನ ಮಾಹಿತಿಯನ್ನು ಅನುಬಂಧದಲ್ಲಿರಿಸಿದೆ. |
| ಇ) | ಅಂತಹ ಖಾಸಗಿ ಸಂಸ್ಥೆಗಳು ಕನ್ನಡ ಭಾಷಾ ಕಲಿಕಾ ಅಧಿನಿಯಮ 2015ನ್ನು ಕಡ್ಡಾಯವಾಗಿ ಪಾಲನೆ ಮಾಡುವ ನಿಟ್ಟಿನಲ್ಲಿ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ರಾಜ್ಯದಲ್ಲಿನ ಎಲ್ಲಾ ಶಾಲೆಗಳಲ್ಲಿ 01 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಎಲ್ಲಾ ವಿದ್ಯಾರ್ಥಿಗಳಿಗೆ 2016-17ನೇ ಶೈಕ್ಷಣಿಕ ವರ್ಷದಿಂದ ಹಂತ ಹಂತವಾಗಿ ಕನ್ನಡವನ್ನು ಒಂದು ಕಡ್ಡಾಯ ಭಾಷೆಯನ್ನಾಗಿ ಕಲಿಸುವ ಸಲುವಾಗಿ ಸರ್ಕಾರವು ಕನ್ನಡ ಭಾಷಾ ಕಲಿಕಾ ಅಧಿನಿಯಮವನ್ನು ದಿನಾಂಕ:02.02.2015ರಲ್ಲಿ ಜಾರಿಗೆ ತರಲಾಗಿದೆ. ಅದೇ ರೀತಿ ಈ ಅಧಿನಿಯಮಕ್ಕೆ ನಿಯಮಗಳನ್ನು ಜಾರಿಗೊಳಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 274 ಪಿಜಿಸಿ 2017, ದಿನಾಂಕ:21.10.2017ರಲ್ಲಿ ನಿಯಗಳನ್ನು ರಚಿಸಿ 2017-18ನೇ ಸಾಲಿನಿಂದ ರಾಜ್ಯದಲ್ಲಿನ ಎಲ್ಲಾ ಶಾಲೆಗಳಲ್ಲಿ ಹಂತ |

| | | |
|---|---|---|
| | | ಹಂತವಾಗಿ ಒಂದನೇ ತರಗತಿಯಿಂದ ಕನ್ನಡವನ್ನು ಪ್ರಥ<br>ಅಥವಾ ದ್ವಿತೀಯ ಭಾಷೆಯನ್ನಾಗಿ ಬೋಧಿಸುವುದನ್ನು ಕಡ್ಡಾಯಗೊಳಿಸಲಾಗಿದೆ.<br><br>ಕೇಂದ್ರ ಸಂಯೋಜನೆ ಪಡೆದು (ಸಿ.ಬಿ.ಎಸ್.ಇ, ಐ.ಸಿ.ಎಸ್.ಇ, ಐ.ಬಿ, ಇತರೆ) ಕನ್ನಡ ಭಾಷಾ ಕಲಿಕಾ ನಿಯಮಗಳನ್ನು ಪಾಲಿಸದ ಶಾಲೆಗಳು ಕರ್ನಾಟಕ ಶಿಕ್ಷಣ ಅಧಿನಿಯಮ 1983 ಸೆಕ್ಷನ್ 128 ರಂತೆ ದಂಡ ವಿಧಿಸಲು ಸಕ್ಷಮ ಪ್ರಾಧಿಕಾರಿಗಳಿಗೆ (ಜಿಲ್ಲಾ ಉಪನಿರ್ದೇಶಕರುಗಳಿಗೆ) ನಿರ್ದೇಶಿಸಿದೆ.<br><br>ಕನ್ನಡ ಭಾಷಾ ಕಲಿಕಾ ಅಧಿನಿಯಮ 2015ನ್ನು ಪ್ರಶ್ನಿಸಿ ಕುಮಾರಿ ಕೀರ್ತನಾ ಸುರೇಶ್ ಇವರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟಿಷನ್ ಸಂಖ್ಯೆ: 17362/2021 ನ್ನು ದಾಖಲಿಸಿರುತ್ತಾರೆ. ಸದರಿ ಪ್ರಕರಣವು ವಿಚಾರಣಾ ಹಂತದಲ್ಲಿರುತ್ತದೆ. |

ಇಪಿ 406 ಪಿಜಿಸಿ 2021

[ಬಿ.ಸಿ. ನಾಗೇಶ್]

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ

ಸಕಾಲ ಸಚಿವರು.

ಅನುಬಂಧ

| ಕನ್ನಡ ಭಾಷಾ ಕಲಿಕಾ ನಿಯಮಗಳು-2017 ಅನ್ನು ಪಾಲಿಸದೇ ಇರುವ ಶಾಲೆಗಳ ವಿವರ (ಬೆಂಗಳೂರು ಮತ್ತು ಮೈಸೂರು ವಿಭಾಗ) | | |
|---|---|---|
| ಕ್ರ.ಸಂ | ಜಿಲ್ಲೆ | ಕನ್ನಡ ಭಾಷಾ ಕಲಿಕಾ ಬೋಧನೆಯನ್ನು ಮಾಡದಿರುವ ಶಾಲೆಗಳ ಹೆಸರು |
| 1 | ಬೆಂಗಳೂರು ಉತ್ತರ | ಸ್ಟೋನ್ ಹಿಲ್ ಇಟಿಟರ್ ನ್ಯಾಷನಲ್ ಸ್ಕೂಲ್ (ಇತರೆ ಐ.ಬಿ) |
| | | ಕೆನಡಿಯನ್ ಇಟಿಟರ್ ನ್ಯಾಷನಲ್ ಸ್ಕೂಲ್. (ಐಜಿಸಿಎಸ್‌ಇ/ಐಬಿ) |
| | | ನ್ಯಾಷನಲ್ ಶಾಲೆ. (ಐಜಿಸಿಎಸ್‌ಇ/ಐಬಿ) |
| 2 | ಬೆಂಗಳೂರು ದಕ್ಷಿಣ | ಗೇರ್ ಇನ್ನೋವೇಟಿ ಶಾಲೆ. ದೊಡ್ಡಕನ್ನಲ್ಲಿ ಬೆಂಗಳೂರು ದಕ್ಷಿಣ ವಲಯ-4, |
| | | ದಿ ಬೆಂಗಳೂರು ಇಟಿಟರ್ ನ್ಯಾಷನಲ್ ದೊಮ್ಮಸಂದ್ರ, ಆನೇಕಲ್ ತಾಲ್ಲೂಕು |
| 3 | ಮೈಸೂರು | ಸಾಂಬೋಟ ಟಿಬೇಟಿಯನ್ ಶಾಲೆ ಅರಳಿಕುಮಾರಿ |
| | | ಸಾಂಬೋಟ ಟಿಬೇಟಿಯನ್ ಶಾಲೆ ಗುಳ್ಳೆದಹಳ್ಳ |
| | | ಸಾಂಬೋಟ ಟಿಬೇಟಿಯನ್ ಶಾಲೆ ಕೈಲಾಸಪುರ |
| | | ಸಿರಾ ಜಿ ಸೆಕೆಂಡ್ರಿ ಶಾಲೆ ಬೈಲಕುಪ್ಪೆ |
| | | ಸಾಂಬೋಟ ಟಿಬೇಟಿಯನ್ ಶಾಲೆ ಬೈಲಕುಪ್ಪೆ |
| | | ಸಾಂಬೋಟ ಟಿಬೇಟಿಯನ್ ಶಾಲೆ ಸಿವಿಪಿ ಬೈಲಕುಪ್ಪೆ |
| | | ಸಾಂಬೋಟ ಚಿಲ್ಡ್ರನ್ ವಿಲೆಜ್ ಬೈಲಕುಪ್ಪೆ |

ಹಿರಿಯ ಸಹಾಯಕ ನಿರ್ದೇಶಕರು
(ಅನುದಾನಿತ ಪ್ರಾಥಮಿಕ ಶಿಕ್ಷಣ)